ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಗುರುವಾರ, ದಿನಾಂಕ : 10 ನೇ ಡಿಸೆಂಬರ್, 2020

2015ನೇ ಸಾಲಿನ ಗೆಜೆಟೆಡ್ ಪ್ರೊಬೆಷನರಿ ಪರೀಕ್ಷೆಯ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) –

350 (444) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) 2015ನೇ ಸಾಲಿನ ಗೆಜೆಟೆಡ್ ಪ್ರೊಬೆಷನರಿ ಪರೀಕ್ಷೆಯ ಉತ್ತರ ಪತ್ರಿಕೆಗಳಲ್ಲಿ ಅಭ್ಯರ್ಥಿಗಳ ಗುರುತು ಸಿಗುವಂತೆ "ಓಂ" "ಶ್ರೀ" ಇತ್ಯಾದಿ ಚಿಹ್ನೆಗಳನ್ನು ನಮೂದಿಸಿದ ಅಭ್ಯರ್ಥಿಗಳ ಸಂಖ್ಯೆ ಎಷ್ಟು;

(ಆ) ಕರ್ನಾಟಕ ಲೋಕಸೇವಾ ಆಯೋಗದ ಸೂಚನೆಗಳ ಪ್ರಕಾರ ಈ ರೀತಿ ಚಿಹ್ನೆಗಳನ್ನು ನಮೂದಿಸಿದ ಅಭ್ಯರ್ಥಿಗಳು ಸಂದರ್ಶನಕ್ಕೆ ಹಾಜರಾಗಲು ಅನರ್ಹರಲ್ಲವೇ; ಈ ರೀತಿ ಅನರ್ಹರಾದವರ ಸಂಖ್ಯೆ ಎಷ್ಟು; ಇವರಲ್ಲಿ ಆಯ್ಕೆ ಆದವರ ಸಂಖ್ಯೆ ಎಷ್ಟು: (ಅಂತಹವರ ಹೆಸರು, ಆಯ್ಕೆಯಾದ ಹುದ್ದೆ, ವರ್ಗ ತಿಳಿಸುವುದು)

(ಇ) ಕೆ. ಎ. ಟಿ ನ್ಯಾಯಾಲಯದ ತೀರ್ಪಿನ ಮೇಲೆ ಇವರಿಗೆ ಸಂದರ್ಶನಕ್ಕೆ ಅವಕಾಶ ಮಾಡಿ ಕೊಟ್ಟಿದಲ್ಲಿ, ಕರ್ನಾಟಕ ಲೋಕಸೇವಾ ಆಯೋಗದ ನಿಯಮ/ಸೂಚನೆಗಳನ್ನು ಉಲ್ಲಂಘಿಸಿದ ಕಾರಣ ಕೆ. ಎ. ಟಿ ತೀರ್ಪಿನ ಮೇಲೆ ರಾಜ್ಯದ ಉಚ್ಚ ನ್ಯಾಯಾಲಯದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಮೇಲ್ಮನವಿ ಸಲ್ಲಿಸಿಲ್ಲದಿರುವುದಕ್ಕೆ ಕಾರಣಗಳೇನು; (ವಿವರ ನೀಡುವುದು)

(ಈ) ಇತರೆ ಪ್ರಕರಣದಲ್ಲಿ ಅಂದರೆ, 2015ನೇ ಸಾಲಿನ ಅಭ್ಯರ್ಥಿಗಳ ಮುಖ್ಯ ಪರೀಕ್ಷೆಯ ಉತ್ತರ ಪತ್ರಿಕೆಗಳನ್ನು ನೀಡಲು, ರಾಜ್ಯ ಮಾಹಿತಿ ಆಯೋಗ, ರಾಜ್ಯ ಉಚ್ಛ ನ್ಯಾಯಾಲಯದ ತೀರ್ಪು ನೀಡಿದ್ದರೂ ವಿಭಾಗೀಯ ಪೀಠದಲ್ಲಿ ಮೇಲ್ಮನವಿ ಸಲ್ಲಿಸಿಲ್ಲವೇಕೆ; ಈ ರೀತಿಯ ತಾರತಮ್ಯ ಮಾಡುತ್ತಿರುವುದು ಸರಿಯೇ?